# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1655
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 20-03-2020

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ಇತ್ತೀಚೆಗ ಡೀಸೆಲ್ ವಾಹನದ ಚಾಲನಾ ವೆಚ್ಚ ಹೆಚ್ಚಾಗುತ್ತಿದ್ದು, ಇಂತಹ ವಾಹನಗಳಿಂದ ಪರಿಸರ ಮಾಲಿನ್ಯ ಉಂಟಾಗುತ್ತಿದ್ದು, ಇವೆರಡನ್ನೂ ನಿಯಂತ್ರಣಕ್ಕೆ ತರಲು ಸರ್ಕಾರ ಬದಲಿ ವ್ಯವಸ್ಥೆ ಕುರಿತು ಯೋಜನೆ ಮಾಡಿಕೊಂಡಿದೆಯೇ; | ಸಾರಿಗೆ ಸಂಸ್ಥೆಗಳು ಪರಿಸರ ಮಾಲಿನ್ಯವನ್ನು ನಿಯಂತ್ರಿಸಲು, ಕೇಂದ್ರ ಸರ್ಕಾರದ ಕಾಯಿದೆ ಅನುಸಾರ 2020-21ನೇ ಸಾಲಿನಿಂದ ಬಿ.ಎಸ್-6 ಮಾದರಿ ವಾಹನಗಳನ್ನು ಖರೀದಿಸಲು ಹಾಗೂ ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣೆ ಮಾಡಲು ಯೋಜಿಸಲಾಗಿದೆ. |
| ಆ | ಸರ್ಕಾರವು ಸದರಿ ಬಸ್ಸುಗಳನ್ನು ಬದಲಾಯಿಸಿ, ವಿದ್ಯುತ್ ಚಾಲನಾ ಬಸ್ಸುಗಳನ್ನು ಬಳಸಲು ಇಚ್ಛಿಸಿರುವುದು ನಿಜವೇ; | ಪ್ರಾಯೋಗಿಕವಾಗಿ ಮೊದಲನೇ ಹಂತದಲ್ಲಿ ಕೇಂದ್ರ ಸರ್ಕಾರದ ಫೇಮ್-2 ಯೋಜನೆಯಡಿಯಲ್ಲಿ ಹಾಗೂ ಬೆಂಗಳೂರು ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಿಸಲು ಯೋಜಿಸಲಾಗಿರುತ್ತದೆ. ಇದರ ಪ್ರಯೋಜನಗಳನ್ನು ಪರಾಮಾರ್ಶಿಸಿ ಹಂತ ಹಂತವಾಗಿ ಡೀಸಲ್ ಬಸ್ಸುಗಳನ್ನು ಬದಲಾಯಿಸಲು ಕ್ರಮ ಕೈಗೊಳ್ಳಲಾಗುವುದು. |
| ಇ | ವಿದ್ಯುತ್ ಚಾಲಿತ ಬಸ್ಸುಗಳನ್ನು ಯಾವ ಮೂಲದ ಮುಖಾಂತರ ಖರೀದಿ ಮಾಡಲಾಗುವುದು ಹಾಗೂ ಈ ವಿದ್ಯುತ್ ಚಾಲಿತ ಬಸ್ಸಿನ ಪ್ರತಿ ಯೂನಿಟ್‌ನ ಬೆಲೆ ಎಷ್ಟು; | ಸಾರಿಗೆ ಸಂಸ್ಥೆಗಳು ವಿದ್ಯುತ್ ಚಾಲಿತ ವಾಹನಗಳನ್ನು ಕೇಂದ್ರ ಸರ್ಕಾರದ ಫೇಮ್-2 ಯೋಜನೆಯಂತೆ ಜಿ.ಸಿ.ಸಿ ಮಾಡೆಲ್‌ನ ಅಡಿಯಲ್ಲಿ ನಿಗದಿತ ಪ್ರೋತ್ಸಾಹ ಧನ ಪಡೆದು ಕಾರ್ಯಾಚರಣೆ ಮಾಡಲು ಯೋಜಿಸಲಾಗಿದೆ ಹಾಗೂ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.<br><br>ಟೆಂಡರ್‌ನಲ್ಲಿ ಬಿಡ್ಡುದಾರರು ಒಟ್ಟು ವೆಚ್ಚ ಒಪ್ಪಂದ (ಜಿ.ಸಿ.ಸಿ) ಮಾಡೆಲ್‌ನ ಆಧಾರದಂತೆ ಪ್ರತಿ ಕಿ.ಮೀಗೆ (ವಿದ್ಯುತ್ ಸಹಿತ ಹಾಗೂ ವಿದ್ಯುತ್ ರಹಿತ) ದರವನ್ನು ನಮೂದಿಸಲು ತಿಳಿಸಲಾಗಿರುತ್ತದೆ. |
| ಈ | ವಿದ್ಯುತ್ ಚಾಲಿತ ಬಸ್ಸುಗಳಿಗೆ ಪ್ರತಿ ಕಿ.ಮೀ.ಗೆ ಆಗುವ ನಿರ್ವಹಣಾ ವೆಚ್ಚವೆಷ್ಟು; | ಟೆಂಡರ್‌ನಲ್ಲಿ, ಬಿಡ್ಡುದಾರರು ಗ್ರಾಸ್ ಕಾಸ್ಟ್ ಕಾಂಟ್ರಾಕ್ಟ್ ಮಾಡೆಲ್‌ನ ಆಧಾರದಂತೆ ಪ್ರತಿ ಕಿ.ಮೀಗೆ (ವಿದ್ಯುತ್ ಸಹಿತ ಹಾಗೂ ವಿದ್ಯುತ್ ರಹಿತ) ದರವನ್ನು ನಮೂದಿಸಲು ತಿಳಿಸಲಾಗಿರುತ್ತದೆ.<br><br>ವಾಹನಗಳ ನಿರ್ವಹಣೆಗೆ ತಗಲುವ ವೆಚ್ಚವು ಸಹ ಟೆಂಡರ್ ಅಂತಿಮಗೊಂಡ ನಂತರ ತಿಳಿಯುವುದು. |
| ಉ | ಈ ತರಹದ ಎಷ್ಟು ವಾಹನಗಳನ್ನು ಯಾವಾಗ ಖರೀದಿಸಲು ಸರ್ಕಾರ ಯೋಚಿಸಿದೆ? | 2020-21ನೇ ಸಾಲಿನಲ್ಲಿ ಸಾರಿಗೆ ಸಂಸ್ಥೆಗಳಿಂದ ಜಿ.ಸಿ.ಸಿ ಮಾಡೆಲ್‌ನ ಆಧಾರದ ಮೇಲೆ ಆಚರಣೆಗೊಳಿಸಲು ಯೋಜಿಸಿರುವ ವಿದ್ಯುತ್ ವಾಹನಗಳನ್ನು ಸಂಖ್ಯೆ ಈ ಕೆಳಗಿನಂತಿದೆ: |

| ಸಂಸ್ಥೆ | ಬಸ್ಸುಗಳ ಸಂಖ್ಯೆ |
|---|---|
| ಕ.ರಾ.ರ.ಸಾ.ನಿಗಮ | 50 |
| ಬೆಂ.ಮ.ಸಾ.ಸಂಸ್ಥೆ | 300 (ಫೇಮ್-2) + 90 (ಸ್ಮಾರ್ಟ್ ಸಿಟಿ) + 500 |
| ವಾ.ಕ.ರ.ಸಾ.ಸಂಸ್ಥೆ | 50 |
| ಈ.ಕ.ರ.ಸಾ.ಸಂಸ್ಥೆ | - |
| ಒಟ್ಟು | **990** |

ಸಂಖ್ಯೆ: ಟಿಡಿ 125 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು